# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜೂನ್ ೧೨, ೨೦೧೪ (ಜ್ಯೇಷ್ಠ ೨೨, ಶಕ ವರ್ಷ ೧೯೩೬)<br>Bangalore, Thursday, June 12, 2014 (Jyeishta 22, Shaka Varsha 1936) | ಸಂಚಿಕೆ ೨೪<br>Issue 24 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ತೋಟಗಾರಿಕೆ ಸಚಿವಾಲಯ

**ವಿಷಯ :** ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯಲ್ಲಿ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ಸೃಜಿಸಿ, ಭರ್ತಿ ಮಾಡುವ ಬಗ್ಗೆ

**ಓದಲಾಗಿದೆ :** 1. ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಆರ್/ಯುಹೆಚ್‌ಎಸ್‌ಬಿ/ಸಿಪಿ/3131/2013-14, ದಿನಾಂಕ: 25-07-2013/09-12-2013

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಕುಲಪತಿಗಳು, ತೋಟಗಾರಿಕೆ ವಿಜ್ಞಾಗಳ ವಿಶ್ವವಿದ್ಯಾಲಯ, 2013-14ನೇ ಸಾಲಿಗೆ ವಿಶ್ವವಿದ್ಯಾಲಯಕ್ಕೆ ಹಾಗೂ ವಿಶ್ವವಿದ್ಯಾಲಯದ ಕೇಂದ್ರ ಕ್ಯಾಂಪಸ್ ಹಾಗೂ ಅಧೀನದಲ್ಲಿರುವ ತೋಟಗಾರಿಕೆ ಕಾಲೇಜು, ಸಂಶೋಧನಾ ಕೇಂದ್ರ, ವಿಸ್ತರಣಾ ಕೇಂದ್ರಗಳಲ್ಲಿ 2013-14ನೇ ಸಾಲಿಗಾಗಿ 3ನೇ ಹಂತದಲ್ಲಿ ಒಟ್ಟು 624 ಬೋಧಕ/ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ದಿನಾಂಕ: 24-05-2013ರಂದು ನಡೆದ ವ್ಯವಸ್ಥಾಪನಾ ಮಂಡಳಿಯು ತೀರ್ಮಾನಿಸಿದ್ದು, ಇದರನ್ವಯ ಪ್ರಸ್ತುತ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯಕ್ಕೆ 624 ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಿದಲ್ಲಿ ವಾರ್ಷಿಕ ರೂ. 2467.80 ಲಕ್ಷಗಳು ಹೆಚ್ಚುವರಿ ವೆಚ್ಚ ತಗಲುತ್ತದೆ. ಈ ವೆಚ್ಚವನ್ನು ವಿಶ್ವವಿದ್ಯಾಲಯವು 2014-15ನೇ ಸಾಲಿನ ಯೋಜನೆಯ ಅನುದಾನದಲ್ಲಿ ಭರಿಸಲಾಗುವುದು.

ಆದ್ದರಿಂದ 2013-14ನೇ ಸಾಲಿಗೆ ಈ ಕೆಳಕಂಡ 138 ಬೋಧಕ ಹಾಗೂ 486 ಬೋಧಕೇತರ (127 ಗ್ರೂಪ್ 'ಡಿ' ಹುದ್ದೆಗಳನ್ನು ಹೊರಗುತ್ತಿಗೆ/ಒಪ್ಪಂದ ಆಧಾರದಲ್ಲಿ ಪಡೆಯಲು) ಹುದ್ದೆಗಳನ್ನು ಸೃಜಿಸಲು ಹಾಗೂ ಭರ್ತಿ ಮಾಡಲು ಅನುಮೋದನೆಯನ್ನು ಕೋರಿರುತ್ತಾರೆ.

| Sl. No. | Various campuses of University | Number of Posts to be created and permission to fill up | | |
|---|---|---|---|---|
| | | Teaching | Non-Teaching | Total |
| 1. | University Headquarters | 01 | 94 | 95 |
| 2. | Colleges | 61 | 238 | 299 |
| 3. | Research Stations | 22 | 98 | 120 |
| 4. | Extension Directorate | 06 | 20 | 26 |
| 5. | Extension Units (New Proposal) | 48 | 36 | 84 |
| | **Total** | **138** | **486** | **624** |

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 255 ತೋಇವಿ 2013, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ, 2014**

2013-14ನೇ ಸಾಲಿನಲ್ಲಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ತೀರಾ ಅಗತ್ಯವಿರುವ ಈ ಕೆಳಕಂಡ 73 ಬೋಧಕ ಹಾಗೂ 287 ಬೋಧಕೇತರ ಒಟ್ಟು 360 ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರವು ಅನುಮತಿ ನೀಡಿದೆ.

**ಬೋಧಕ ಹುದ್ದೆ (Teaching Staff) :**

| Sl. No. | Name of the Post | No. of Posts |
|---|---|---|
| 1. | Assistant Professor | 40 |
| 2. | Associate Professor | 20 |
| 3. | Professor | 10 |
| 4. | Technical Assistant | 03 |
| | **Total** | **73** |

**ಬೋಧಕೇತರ ಹುದ್ದೆ (Non-Teaching Staff) :**

| Sl. No. | Name of the Post | No. of Posts |
|---|---|---|
| 1. | Assistant Registrar | 06 |
| 2. | Assistant Comptroller | 06 |
| 3. | Superintendent-General-10, Accounts-10 | 20 |
| 4. | Assistant Cum Computer Operator/FDA | 30 |
| 5. | Field Assistant | 30 |
| 6. | Lab Assistant | 30 |
| 7. | Driver | 10 |
| 8. | Group D | 127 |
| 9. | Assistant Cook | 10 |
| 10. | Caretaker | 10 |
| 11. | Assistant Medical Officer | 05 |
| 12. | Assistant Librarian | 03 |
| | **Total** | **287** |

ಈ ಹುದ್ದೆಗಳ ಸೃಜನೆಯಿಂದ ತಗಲುವ ವೆಚ್ಚವನ್ನು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಯೇ ಭರಿಸತಕ್ಕದ್ದು.

ಬೋಧಕೇತರ ಹುದ್ದೆಗಳಲ್ಲಿ 10 ವಾಹನ ಚಾಲಕರು, 127 ಗ್ರೂಪ್ 'ಡಿ' ಹುದ್ದೆಗಳು, 10 ಅಡಿಗೆ ಸಹಾಯಕರು ಹಾಗೂ 10 ಕೇರ್‌ಟೇಕರ್ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳತಕ್ಕದ್ದು ಹಾಗೂ ಉಳಿದ ಹುದ್ದೆಗಳನ್ನು ನಿಯಮಾನುಸಾರ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 184 ವೆಚ್ಚ–4/2013, ದಿನಾಂಕ: 21–01–2014ರಲ್ಲಿ ಹಾಗೂ ದಿನಾಂಕ: 29–01–2014ರ ಅನಧಿಕೃತ ಟಿಪ್ಪಣಿಯಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ

**P.R. 417**
**SC 20**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಭದ್ರತೆ ಮತ್ತು ಸುರಕ್ಷತೆಯ ದೃಷ್ಟಿಯಿಂದ ಸರ್ಕಾರಿ ಮಹಿಳಾ ಸಿಬ್ಬಂದಿಗಳನ್ನು ಸಂಜೆ 6.00 ಗಂಟೆಯ ನಂತರ ಕಛೇರಿಯ ಕರ್ತವ್ಯದಲ್ಲಿ ಮುಂದುವರೆಸದಿರುವ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಸಮಿತಿ ರಚಿಸುವ ಕುರಿತು.

**ಪ್ರಸ್ತಾವನೆ:**

ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಇವರು ದಿನಾಂಕ:05–02–2014ರ ಪತ್ರದಲ್ಲಿ ಮೈಸೂರಿನ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಉಪ ನಿರ್ದೇಶಕರ ಕಛೇರಿಗೆ ಭೇಟಿ ನೀಡಿದಾಗ ಅಲ್ಲಿದ್ದಂತಹ ಪರಿಸ್ಥಿತಿ ಮತ್ತು ಸಮಸ್ಯೆಗಳ ಬಗ್ಗೆ ವಿವರಿಸುತ್ತ, ಸದರಿ ಕಛೇರಿಯಲ್ಲಿ ಮಹಿಳಾ ಸರ್ಕಾರಿ ನೌಕರರು ಕಛೇರಿ ಅವಧಿ ಮುಗಿದ ನಂತರದಲ್ಲಿ ಎರಡು–ಮೂರು ಗಂಟೆಗಳವರೆಗೂ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಬಗ್ಗೆ ಪ್ರಸ್ತಾಪಿಸಿ, ಮಹಿಳಾ ಸರ್ಕಾರಿ ನೌಕರರನ್ನು ಸಂಜೆ 6–00 ಗಂಟೆಯ ನಂತರ ಕಛೇರಿ ಕರ್ತವ್ಯದಲ್ಲಿ ಮುಂದುವರೆಸುವುದರಿಂದ ಅವರ ಭದ್ರತೆ ಮತ್ತು ಸುರಕ್ಷತೆಗೆ ತೊಂದರೆಯುಂಟಾಗುವುದಾಗಿ ತಿಳಿಸಿ, ಮಹಿಳಾ ಸರ್ಕಾರಿ ನೌಕರರು ಸಂಜೆ 6–00 ಗಂಟೆಯ ನಂತರ ಕಛೇರಿಯಲ್ಲಿ ಮುಂದುವರೆಯದಿರುವ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕೋರಿರುತ್ತಾರೆ.

ಮಾನ್ಯ ಉಪಲೋಕಾಯುಕ್ತರವರು ನೀಡಿರುವ ಸಲಹೆ ಹಿನ್ನೆಲೆಯಲ್ಲಿ ಮಹಿಳಾ ನೌಕರರು ರಾಜ್ಯ ಸರ್ಕಾರದ ಕೆಲವು ಇಲಾಖೆಗಳಲ್ಲಿ ಕಛೇರಿ ಅವಧಿ ಮುಗಿದ ನಂತರವೂ ಎರಡು–ಮೂರು ಗಂಟೆಗಳಿಗೂ ಹೆಚ್ಚಿನ ಅವಧಿವರೆಗೆ ಕರ್ತವ್ಯ ನಿರ್ವಹಿಸುತಿದ್ದು, ಇದರಿಂದ ಅವರಿಗೆ ಕೌಟುಂಬಿಕ ಜವಾಬ್ದಾರಿಯ ಮಾನಸಿಕ ಒತ್ತಡ ಹೆಚ್ಚಾಗುವುದರ ಜೊತೆಗೆ ಅವರ ಭದ್ರತೆ ಮತ್ತು ಸುರಕ್ಷತೆಗೂ ತೊಂದರೆಯಾಗುತ್ತಿರುವ ಅಂಶದ ಕುರಿತು ಕೂಲಂಕಷವಾಗಿ ಪರಿಶೀಲಿಸಿ ಹಾಗೂ ಈ ನಿಟ್ಟಿನಲ್ಲಿ ಮಹಿಳಾ ಸರ್ಕಾರಿ ನೌಕರರ ಸುರಕ್ಷತೆಯನ್ನು ಕಾಪಾಡಲು ಅನುಸರಿಸಬೇಕಾದ ಕ್ರಮ, ಸಲಹೆ ಮತ್ತು ಮಾರ್ಗೋಪಾಯಗಳ ಕುರಿತು ವರದಿ ನೀಡಲು ಸಮಿತಿಯೊಂದನ್ನು ರಚಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸೇನಿಸಿ 2014 ಬೆಂಗಳೂರು, ದಿನಾಂಕ:19/04/2014**

ಮಹಿಳಾ ಸರ್ಕಾರಿ ನೌಕರರು ಸರ್ಕಾರಿ ಕಛೇರಿಗಳಲ್ಲಿ ಸಂಜೆ 6–00 ಗಂಟೆಯ ನಂತರ ಕರ್ತವ್ಯದಲ್ಲಿ ಮುಂದುವರೆಯುವುದರಿಂದ ಅವರ ಭದ್ರತೆ ಮತ್ತು ಸುರಕ್ಷತೆಯ ಮೇಲಾಗುವ ಪರಿಣಾಮಗಳ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ ಕಛೇರಿಯಲ್ಲಿನ ಅವರ ಕಾರ್ಯನಿರ್ವಹಣೆಗೂ ತೊಡಕಾಗದಂತೆ ಅನುಸರಿಸಬೇಕಾದ ಕ್ರಮ, ಮಾರ್ಗೋಪಾಯ ಮತ್ತು ಸಲಹೆಗಳ ಕುರಿತು ವರದಿಯನ್ನು ಸಲ್ಲಿಸಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) | ಅಧ್ಯಕ್ಷರು |
| 2) | ಕಾರ್ಯದರ್ಶಿಯವರು,<br>ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗ | ಸದಸ್ಯರು |
| 3) | ಸರ್ಕಾರ ಅಪರ ಕಾರ್ಯದರ್ಶಿಯವರು<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾನಿಯಮಗಳು) | ಸದಸ್ಯ<br>ಕಾರ್ಯದರ್ಶಿ |

ಸಮಿತಿಯು ಎರಡು ವಾರಗಳೊಳಗಾಗಿ ವರದಿಯನ್ನು ಸಿದ್ದಪಡಿಸಿ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಮಂಗಳ ಜಿ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1)

**P.R. 403**
**SC - 200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ನಾಗರಿಕ ಸೇವಾ ಮಂಡಳಿಗಳನ್ನು ರಚಿಸಿರುವ ಸರ್ಕಾರಿ ಆದೇಶವನ್ನು ನಿಲಂಬನೆಯಲ್ಲಿಡುವ ಬಗ್ಗೆ.

**ಓದಲಾಗಿದೆ :**

1) ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 82/2011 ಮತ್ತು 234/2011ರಲ್ಲಿನ ದಿನಾಂಕ: 31–10–2013ರ ಸರ್ವೋಚ್ಚ ನ್ಯಾಯಾಲಯದ ತೀರ್ಪು.
2) ಭಾರತೀಯ ಆಡಳಿತ ಸೇವೆ (ವೃಂದ) ತಿದ್ದುಪಡಿ ನಿಯಮಗಳು, 2014ನ್ನು ಪ್ರಕಟಿಸಿರುವ ದಿನಾಂಕ:28–01–2014ರ ಕೇಂದ್ರ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ಅಧಿಸೂಚನೆ.
3) ಭಾರತೀಯ ಪೊಲೀಸ್ ಸೇವೆ (ವೃಂದ) ತಿದ್ದುಪಡಿ ನಿಯಮಗಳು, 2014ನ್ನು ಪ್ರಕಟಿಸಿರುವ ದಿನಾಂಕ:28–01–2014ರ ಕೇಂದ್ರ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ಅಧಿಸೂಚನೆ.
4) ಭಾರತೀಯ ಅರಣ್ಯ ಸೇವೆ (ವೃಂದ) ತಿದ್ದುಪಡಿ ನಿಯಮಗಳು, 2014ನ್ನು ಪ್ರಕಟಿಸಿರುವ ದಿನಾಂಕ:28–01–2014ರ ಕೇಂದ್ರ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ಅಧಿಸೂಚನೆ.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 976 ಸೇಅಸೆ 2013, ದಿನಾಂಕ:31–01–2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:31–10–2013ರ ಸರ್ವೋಚ್ಚ ನ್ಯಾಯಾಲಯದ ತೀರ್ಪು ಹಾಗೂ ಮೇಲೆ (2) ರಿಂದ (4)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ದಿನಾಂಕ:28–01–2014ರ ಅಧಿಸೂಚನೆಗಳನ್ವಯ ಮೇಲೆ (5)ರಲ್ಲಿ ಓದಲಾದ ದಿನಾಂಕ:31-01–2014ರ ಸರ್ಕಾರಿ ಆದೇಶದಲ್ಲಿ ನಾಗರಿಕ ಸೇವಾ ಮಂಡಳಿಗಳನ್ನು ರಚಿಸಲಾಗಿದೆ.

ದಿನಾಂಕ:03–03–2014ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಈ ವಿಷಯವನ್ನು ಪ್ರಕರಣ ಸಂಖ್ಯೆ: ಸಿ.231/2014ರಲ್ಲಿ ಅನೌಪಚಾರಿಕವಾಗಿ ಚರ್ಚಿಸಿ, ನಾಗರಿಕ ಸೇವಾ ಮಂಡಳಿಯನ್ನು ರಚಿಸಿ ಹೊರಡಿಸಲಾದ ಆದೇಶವನ್ನು ತಾತ್ಕಾಲಿಕವಾಗಿ ನಿಲಂಬನೆಯಲ್ಲಿಡಲು ನಿರ್ಧರಿಸಿ ಈ ಹಿಂದೆ ಜಾರಿಯಲ್ಲಿದ್ದ ಪದ್ಧತಿಯನ್ನೇ ಮುಂದುವರೆಸಿಕೊಂಡು ಹೋಗಬೇಕೆಂದು ಆದೇಶಿಸಿದೆ. ಮುಂದುವರೆದು ಈ ವಿಷಯದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿದ ಆದೇಶದನ್ವಯ ಜಾರಿಗೊಳಿಸಬೇಕಾದ ಕ್ರಮಗಳನ್ನು ಕುರಿತು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ಒಂದು ಸಚಿವ ಸಂಪುಟದ ಉಪಸಮಿತಿಯನ್ನು ಸಹ ರಚಿಸಲು ನಿರ್ಣಯಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 976 ಸೇಅಸೆ 2013, ಬೆಂಗಳೂರು, ದಿನಾಂಕ:12ನೇ ಮಾರ್ಚ್ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನಾಗರಿಕ ಸೇವಾ ಮಂಡಳಿಗಳನ್ನು ರಚಿಸಿದ್ದ ದಿನಾಂಕ:31-01-2014ರ ಸರ್ಕಾರಿ ಆದೇಶವನ್ನು ತಾತ್ಕಾಲಿಕವಾಗಿ ನಿಲಂಬನೆಯಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಹೆಚ್. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)

P.R. 404

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 07 ಗಕಾಸ 2013 (ಭಾಗ-1) ಬೆಂಗಳೂರು, ದಿನಾಂಕ: 03-04-2014**

ಸರ್ಕಾರದ ಆದೇಶ ಕ್ರಮಾಂಕ ಸಿಆಸುಇ 07 ಗಕಾಸ 2013, ದಿನಾಂಕ: 20-01-2014ರಲ್ಲಿ ಅಧ್ಯಕ್ಷತೆಗಾಗಿ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಹಸ್ತಾಂತರಿಸಲಾಗಿರುವ ಸಮಿತಿಗಳ ಪೈಕಿ **"ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿ" ಯನ್ನು (ಅನುಬಂಧ-ಇ : ಕ್ರಮಸಂಖ್ಯೆ 18) ಹಿಂಪಡೆಯಲಾಗಿದೆ. "ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿ" ಯನ್ನು ಪುನಃ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿಯೇ ಮುಂದುವರೆಸಲಾಗಿದೆ.** (ಅನುಬಂಧ-ಅ: ಕ್ರಮ ಸಂಖ್ಯೆ : 37 **"ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿ"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವಿ. ಶಾಂತಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ-ಕಾರ್ಯಾಧ್ಯಯನ-ಎ)

P.R. 405
SC - 200

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ವಿ. ರಘುರಾಮ ರೆಡ್ಡಿ, ನಿರ್ದೇಶಕರು, ಜಿಲ್ಲಾ ಯೋಜನಾ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಪಿಡಿ 49 ಎಸ್ಎಸ್ಎಂ 2013, ದಿನಾಂಕ: 28-02-2013.

2) ಪ್ರಭಾರ ಭತ್ಯೆ ಅರ್ಜಿ ದಿನಾಂಕ: 19-03-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀ ಸಿಂಗ್ರಯ್ಯ, ಜಂಟಿ ನಿರ್ದೇಶಕರು, ಜನಶಕ್ತಿ ಮತ್ತು ಉದ್ಯೋಗ (ಎಂ&ಇ) ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರ ನಿವೃತ್ತಿಯಿಂದ ತೆರವಾದ ಹುದ್ದೆಯಲ್ಲಿ ಶ್ರೀ ಕೆ.ವಿ. ರಘುರಾಮ ರೆಡ್ಡಿ, ಜಂಟಿ ನಿರ್ದೇಶಕರು, ಜಿಲ್ಲಾ ಯೋಜನಾ ವಿಭಾಗ, ಯೋಜನಾ ಇಲಾಖೆ, ರವರನ್ನು ದಿನಾಂಕ:28-02-2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಮನವಿಯಲ್ಲಿ ಅಧಿಕಾರಿಯವರು ದಿನಾಂಕ:28-02-2013ರ ಅಪರಾಹ್ನದಿಂದ ದಿನಾಂಕ:29-07-2013ರ ವರೆಗಿನ ಅವಧಿಗೆ ಜಂಟಿ ನಿರ್ದೇಶಕರು, ಜನಶಕ್ತಿ ಮತ್ತು ಉದ್ಯೋಗ (ಎಂ&ಇ) ವಿಭಾಗ, ಯೋಜನಾ ಇಲಾಖೆ, ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ್ದು ಸದರಿ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 72 ಸಲುಸೇ 2014 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2014**

ಶ್ರೀ ಕೆ.ವಿ. ರಘುರಾಮ ರೆಡ್ಡಿ, ಜಂಟಿ ನಿರ್ದೇಶಕರು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರು ಜಂಟಿ ನಿರ್ದೇಶಕರು ಜನಶಕ್ತಿ ಮತ್ತು ಉದ್ಯೋಗ (ಎಂ&ಇ), ಯೋಜನಾ ಇಲಾಖೆ, ಹುದ್ದೆಯಲ್ಲಿ ದಿನಾಂಕ:28-02-2013ರ ಅಪರಾಹ್ನದಿಂದ 29-07-2013 ರವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿರುವುದಕ್ಕಾಗಿ, ಜಂಟಿ ನಿರ್ದೇಶಕರು ಹುದ್ದೆಯ ವೇತನ ಶ್ರೇಣಿ ರೂ. 52,500-73,000 ರ ಕನಿಷ್ಠ ವೇತನದ ಶೇಕಡ 7.5 ರಷ್ಟು ಪ್ರಭಾರ ಭತ್ಯೆಯನ್ನು ಸದರಿ ಅಧಿಕಾರಿಯವರಿಗೆ ಸರ್ಕಾರದ ಆದೇಶ ಸಂಖ್ಯೆ:ಆಇ 3 ಸೇನಿಸೇ 2012, ದಿನಾಂಕ: 14-06-2012 ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ 68ರ ಅನ್ವಯ ಮಂಜೂರು ಮಾಡಲಾಗಿದೆ.

*ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,*
**ಡಾ|| ಗೀತಾ ಎಲ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

P.R. 406

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಜಯರಾಂ, ನಿರ್ದೇಶಕರು, ಎಡಿಬಿ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಪಿಡಿ 43 ಎಸ್‌ಎಸ್‌ಎಂ 2012, ದಿನಾಂಕ: 15–06–2012.

2) ಅಧಿಸೂಚನೆ ಸಂಖ್ಯೆ: ಪಿಡಿ 88 ಎಸ್‌ಪಿಟಿ 2011, ದಿನಾಂಕ: 06–08–2012.

3) ಪ್ರಭಾರ ಭತ್ಯೆ ಅರ್ಜಿ ದಿನಾಂಕ: 11–02–2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀ ಡಿ. ಜಯರಾಂ, ಸಂಶೋಧನಾ ಸಮಾಲೋಚಕರು ಮತ್ತು ಅಪರ ಕಾರ್ಯದರ್ಶಿಗಳು, ರಾಜ್ಯ ಯೋಜನಾ ಮಂಡಳಿ ಇವರನ್ನು ಜಂಟಿ ನಿರ್ದೇಶಕರು, 6ನೇ ಆರ್ಥಿಕ ಗಣತಿ ಸಮೀಕ್ಷೆ ವಿಭಾಗ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕೇಂದ್ರ ಕಚೇರಿ, ಬೆಂಗಳೂರು, ಇಲ್ಲಿಗೆ ವರ್ಗಾವಣೆ ಮಾಡಿ ಆದೇಶಿಸಿರುವುದರಿಂದ ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಸದರಿ ಅಧಿಕಾರಿಯವರನ್ನು ದಿನಾಂಕ: 06–08–2012ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಸಂಶೋಧನಾ ಸಮಾಲೋಚಕರು ಮತ್ತು ಅಪರ ಕಾರ್ಯದರ್ಶಿಗಳು, ರಾಜ್ಯ ಯೋಜನಾ ಮಂಡಳಿ ಹುದ್ದೆಯಿಂದ ಬಿಡುಗಡೆಗೊಳಿಸಿ ಅದೇ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿಡಲಾಗಿದೆ. ಅದರಂತೆ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ದಿನಾಂಕ:06–08–2012 ರಿಂದ 21–12–2012 ರವರೆಗೆ ಹೆಚ್ಚುವರಿ ಪ್ರಭಾರದ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ್ದು ಸದರಿ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 72 ಸಲುಸೇ 2014 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2014**

ಶ್ರೀ ಡಿ. ಜಯರಾಂ, ನಿರ್ದೇಶಕರು, ಎಡಿಬಿ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರು ಸಂಶೋಧನಾ ಸಮಾಲೋಚಕರು ಮತ್ತು ಅಪರ ಕಾರ್ಯದರ್ಶಿಗಳು, ರಾಜ್ಯ ಯೋಜನಾ ಮಂಡಳಿ, ಹುದ್ದೆಯಲ್ಲಿ ದಿನಾಂಕ: 06–08–2012 ರಿಂದ 21–12–2012 ರವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿರುವುದಕ್ಕಾಗಿ, ಸಂಶೋಧನಾ ಸಮಾಲೋಚಕರು ಮತ್ತು ಅಪರ ಕಾರ್ಯದರ್ಶಿಗಳು ಹುದ್ದೆಯ ವೇತನ ಶ್ರೇಣಿ ರೂ.40050–56550ರ ಕನಿಷ್ಠ ವೇತನದ ಶೇಕಡ 7.5 ರಷ್ಟು ಪ್ರಭಾರ ಭತ್ಯೆಯನ್ನು ಸದರಿ ಅಧಿಕಾರಿಯವರಿಗೆ ಸರ್ಕಾರದ ಆದೇಶ ಸಂಖ್ಯೆ:ಆಇ 3 ಸೇನಿಸೇ 2012, ದಿನಾಂಕ: 14–06–2012 ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ 68ರ ಅನ್ವಯ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಗೀತಾ ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**P.R. 407**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿರ್ದೇಶಕರು, ಸಂಪೂರ್ಣ ಯೋಜನಾ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಪಿಡಿ 10 ಎಸ್‌ಎಸ್‌ಎಂ 2013, ದಿನಾಂಕ: 23–01–2013 ಮತ್ತು ದಿನಾಂಕ:24–01–2013.

2) ಪ್ರಭಾರ ಭತ್ಯೆ ಅರ್ಜಿ ದಿನಾಂಕ: 11–02–2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿರ್ದೇಶಕರು, ಸಂಪೂರ್ಣ ಯೋಜನಾ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರನ್ನು ದಿನಾಂಕ:23–01–2013 ರಿಂದ ಜಾರಿಗೆ ಬರುವಂತೆ ಹಿರಿಯ ನಿರ್ದೇಶಕರು, ಮಾನವ ಅಭಿವೃದ್ಧಿ ವಿಭಾಗ, ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿರಿಸಿ ಆದೇಶಿಸಲಾಗಿದೆ. ಮೇಲೆ (2) ರಲ್ಲಿ ಓದಲಾದ ಮನವಿಯಲ್ಲಿ ಅಧಿಕಾರಿಯವರು ದಿನಾಂಕ: 31–01–2013ರ ಪೂರ್ವಾಹ್ನದಿಂದ ದಿನಾಂಕ:04–04–2013ರ ಅಪರಾಹ್ನದವರೆಗಿನ ಅವಧಿಗೆ ಹಿರಿಯ ನಿರ್ದೇಶಕರು, ಮಾನವ ಅಭಿವೃದ್ಧಿ ವಿಭಾಗ, ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ್ದು ಸದರಿ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 72 ಸಲುಸೇ 2014 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2014**

ಶ್ರೀ ಎಂ.ಎನ್. ನರಸಿಂಹಮೂರ್ತಿ, ನಿರ್ದೇಶಕರು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರು ಹಿರಿಯ ನಿರ್ದೇಶಕರು, ಮಾನವ ಅಭಿವೃದ್ಧಿ ವಿಭಾಗ, ಯೋಜನಾ ಇಲಾಖೆ, ಹುದ್ದೆಯಲ್ಲಿ ದಿನಾಂಕ:31–01–2013 ರಿಂದ 04–04–2013ರ ಅಪರಾಹ್ನದವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿರುವುದಕ್ಕಾಗಿ, ಹಿರಿಯ ನಿರ್ದೇಶಕರ ಹುದ್ದೆಯ ವೇತನ ಶ್ರೇಣಿ ರೂ. 48,900–63,600ರ ಕನಿಷ್ಠ ವೇತನದ

ಶೇಕಡ 7.5 ರಷ್ಟು ಪ್ರಭಾರ ಭತ್ಯೆಯನ್ನು ಸದರಿ ಅಧಿಕಾರಿಯವರಿಗೆ ಸರ್ಕಾರದ ಆದೇಶ ಸಂಖ್ಯೆ:ಆಇ 3 ಸೇನಿಸೇ 2012, ದಿನಾಂಕ:14–06–2012 ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ 68ರ ಅನ್ವಯ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಗೀತಾ ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

P.R. 408

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಟಿ. ಅಶೋಕ್ ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ) ಇವರು ಅಮಾನತ್ತಿನಲ್ಲಿದ್ದ ಅವಧಿಯನ್ನು ಕ್ರಮಬದ್ಧಗೊಳಿಸುವ ಬಗ್ಗೆ

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 06 ಸೇಇವಿ 2008 ದಿನಾಂಕ: 29–04–2008
2) ನೋಟೀಸ್ ಸಂಖ್ಯೆ: ಸಿಆಸುಇ 06 ಸೇಇವಿ 2008, ದಿನಾಂಕ: 06–11–2008
3) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 06 ಸೇಇವಿ 2008 ದಿನಾಂಕ: 17–03–2009
4) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 06 ಸೇಇವಿ 2008 ದಿನಾಂಕ: 01–12–2009
5) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 06 ಸೇಇವಿ 2008 ದಿನಾಂಕ: 29–07–2011
6) ವಿಚಾರಣಾಧಿಕಾರಿಯವರ ಪತ್ರ ದಿನಾಂಕ 20–07–2013
7) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 06 ಸೇಇವಿ 2008 ದಿನಾಂಕ: 23–12–2013

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಟಿ. ಅಶೋಕ್, ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರುಗಳು ಈ ಹಿಂದೆ ಆರ್ಥಿಕ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿದ್ದ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು ಶಾಖಾಧಿಕಾರಿ ಇವರುಗಳ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿ ಇರಿಸಿ ಸದರಿ ಅಧಿಕಾರಿಗಳನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ನೋಟೀಸಿನೊಂದಿಗೆ, ಸದರಿ ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ಮತ್ತು 11 ಎ ರಡಿ ಶಿಸ್ತು ಕ್ರಮ ಕೈಗೊಳ್ಳುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಗಿತ್ತು.

ಮೇಲೆ (3) ಮತ್ತು (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಟಿ. ಅಶೋಕ್, ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರುಗಳ ವಿರುದ್ಧದ ಶಿಸ್ತುಕ್ರಮವನ್ನು ಬಾಕಿ ಇಟ್ಟು ಸದರಿ ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಮರುಸ್ಥಾಪಿಸಿ ಆದೇಶಿಸಲಾಗಿತ್ತು.

ಮೇಲೆ 5ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಪ್ರಕರಣದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಿ ಆದೇಶಿಸಲಾಗಿತ್ತು.

ಅದರಂತೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ ಓದಲಾದ 06ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ತಮ್ಮ ವರದಿಯಲ್ಲಿ, ಶ್ರೀ ಟಿ. ಅಶೋಕ್ ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ ಇವರ ವಿರುದ್ಧ ಹೊರಿಸಲಾಗಿದ್ದ ಒಂದು ಆರೋಪ ಮತ್ತು ಶ್ರೀ ಎಂ. ದೇವರಾಜು ಶಾಖಾಧಿಕಾರಿ ಇವರ ವಿರುದ್ಧ ಹೊರಿಸಲಾಗಿದ್ದ 02 ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ನಿರ್ಣಯಿಸಿರುತ್ತಾರೆ. ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಎಂ. ದೇವರಾಜು ಇವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಆದೇಶ ಸಂಖ್ಯೆ ಡಿಪಿಎಆರ್ 38 ಎಸ್‌ಎಎಸ್2009 ದಿನಾಂಕ: 05–04–2010 ರಲ್ಲಿ ಸಿ.ಐ.ಡಿ.ಗೆ ಅನುಮತಿ ನೀಡಲಾಗಿದ್ದು ಪ್ರಕರಣದ ವಿಚಾರಣೆಯು ನ್ಯಾಯಾಲಯದಲ್ಲಿ ಬಾಕಿ ಇದ್ದುದರಿಂದ ಇಲಾಖಾ ಶಿಸ್ತು ವ್ಯವಹರಣೆಗಳು ಮತ್ತು ನ್ಯಾಯಾಂಗ ವ್ಯವಹರಣೆಗಳು ಬೇರೆ ಬೇರೆಯಾಗಿರುವುದರಿಂದ ಮತ್ತು ಸರ್ಕಾರಿ ನೌಕರನು ಕ್ರಿಮಿನಲ್ ಆರೋಪದ ಮೇಲೆ ತಪ್ಪಿತಸ್ಥನೆಂದು ತೀರ್ಪು ನೀಡಿದ ಸಂದರ್ಭದಲ್ಲಿ ಅಂತಹ ನಿರ್ಣಯವು ಸಂವಿಧಾನದ 311(2) ಮತ್ತು 309ನೇ ಅನುಚ್ಛೇದದಡಿ ನಡೆಸುವ ಇಲಾಖಾ ವಿಚಾರಣೆಯಲ್ಲಿನ ತೀರ್ಮಾನಕ್ಕೆ ಸಮನಾದುದು ಎಂದು ತೀರ್ಮಾನಿಸಿ ಕ.ನಾಸೇ(ಸಿಸಿಎ) 1957ರ ನಿಯಮ 14(1)ರಡಿಯಲ್ಲಿನ ಅಧಿಕಾರವನ್ನು ಚಲಾಯಿಸಿ ನ್ಯಾಯಾಲಯದ ತೀರ್ಮಾನ ಪ್ರಕರಣದ ವಿಷಯಗಳು ಸಂದರ್ಭ ಸನ್ನಿವೇಶಗಳು ಮತ್ತು ಆತನು ತಪ್ಪಿತಸ್ಥನೆಂಬ ತೀರ್ಪಿಗೆ ಕಾರಣವಾದ ನಡತೆಯ ಆಧಾರದ ಮೇಲೆ ಕ.ನಾ.ಸೇ(ಸಿಸಿಎ) 1957ರ ನಿಯಮ 8 ರಡಿ ದಂಡನೆಯನ್ನು ವಿಧಿಸಲು ಅವಕಾಶವಿರುವ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಅಂಗೀಕರಿಸಿದ ಸರ್ಕಾರವು ಮೇಲೆ ಓದಲಾದ 07ರ ಸರ್ಕಾರದ ಆದೇಶದನ್ವಯ ಶ್ರೀ ಟಿ. ಅಶೋಕ್ ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ ಮತ್ತು ಶ್ರೀ ಎಂ.ದೇವರಾಜು ಶಾಖಾಧಿಕಾರಿ ಇವರುಗಳ ವಿರುದ್ಧದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿರುತ್ತದೆ.

ಶ್ರೀ ಎಂ. ದೇವರಾಜು ಇವರ ವಿರುದ್ಧದ ಕ್ರಿಮಿನಲ್ ಮೊಕದ್ದಮೆ ಇತ್ಯರ್ಥವಾದ ನಂತರ ಇವರ ಅಮಾನತ್ತಿನ ಅವಧಿಯ ಬಗ್ಗೆ ಅಂತಿಮ ತೀರ್ಮಾನ ತೆಗೆದುಕೊಳ್ಳಲು ನಿರ್ಧರಿಸಿದ ಸರ್ಕಾರವು ಇದೇ ಪ್ರಕರಣಕ್ಕೆ ಸಂಬಂಧಿಸಿದ ಶ್ರೀ ಟಿ. ಅಶೋಕ್ ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ ಇವರು ಅಮಾನತ್ತಿನಲ್ಲಿದ್ದ ದಿನಾಂಕ: 29–04–2008 ರಿಂದ ದಿನಾಂಕ 17–03–2009ರ ಅವಧಿಯನ್ನು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100 ರನ್ವಯ "**ಕರ್ತವ್ಯದ ಅವಧಿ**" ಎಂದು ಪರಿಗಣಿಸಿ ಆದೇಶಿಸಲು ನಿರ್ಧರಿಸಿದ್ದರಿಂದ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಸೇಇವಿ 2008 ಬೆಂಗಳೂರು, ದಿನಾಂಕ: 19–03–2014**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಟಿ. ಅಶೋಕ್ ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಿ) ಇವರು ಈ ಹಿಂದೆ ಆರ್ಥಿಕ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿದ್ದ ಆರೋಪಗಳಿಂದ ಇವರನ್ನು ದೋಷಮುಕ್ತಗೊಳಿಸಿ ಆದೇಶಿಸಿರುವುದರಿಂದ ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಟಿ. ಅಶೋಕ್ ಪ್ರಸ್ತುತ ಸರ್ಕಾರದ ಉಪ ಕಾರ್ಯದರ್ಶಿ ಇವರು ಅಮಾನತ್ತಿನಲ್ಲಿದ್ದ ದಿನಾಂಕ: 29–04–2008 ರಿಂದ ದಿನಾಂಕ: 17–03–2009ರ ಅವಧಿಯನ್ನು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100 ರನ್ವಯ "**ಕರ್ತವ್ಯದ ಅವಧಿ**" ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

**P.R. 409**

## ಒಳಾಡಳಿತ ಸಚಿವಾಲಯ

**ವಿಷಯ :** "ದ ಸಿಗರೇಟ್ ಅಂಡ್ ಅದರ್ ಟೊಬ್ಯಾಕೊ ಪ್ರಾಡಕ್ಟ್ ಆಕ್ಟ್–2003" ಮತ್ತು "ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು–2011" ರಡಿ ದಾಖಲಿಸುವ ಪ್ರಕರಣಗಳು ಮತ್ತು ವಿಧಿಸಲಾಗುವ ದಂಡನೆಯ ಅಂಕಿಅಂಶಗಳ ಕ್ರೋಢೀಕೃತ ಮಾಹಿತಿಯನ್ನು ಸಂಗ್ರಹಿಸಲು ನೋಡಲ್ ಅಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಆಕುಕ 156 ಸಿಜಿಇ 2012, ಬೆಂಗಳೂರು, ದಿನಾಂಕ : 04–07–2013.
2. ಸರ್ಕಾರದ ಸುತ್ತೋಲೆ ಸಂಖ್ಯೆ : ಒಇ 35 ಪಿಸಿಬಿ 2013, ಬೆಂಗಳೂರು, ದಿನಾಂಕ : 16–09–2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ COTPA–2003ರ ಕಾಯ್ದೆಯಡಿ ಸರ್ಕಾರಕ್ಕೆ ಸಲ್ಲಿಸುತ್ತಿರುವ ಮಾಸಿಕ ವರದಿಯಲ್ಲಿ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕುರಿತು ತೆಗೆದುಕೊಂಡ ಕ್ರಮವನ್ನು ಸಹ ಅಂದರೆ, ಗುಟ್ಕಾ ತಯಾರಿಕಾ ಘಟಕ ಮತ್ತು ಮಾರಾಟ ಅಂಗಡಿಗಳ ಮೇಲೆ ನಡೆಸಿದ ದಾಳಿಯ ಪ್ರಕರಣಗಳ ಸಂಖ್ಯೆ, ಸಂಗ್ರಹಿಸಿದ ದಂಡ ಹಾಗೂ ವಶಪಡಿಸಿಕೊಳ್ಳಲಾದ ಪದಾರ್ಥಗಳ ವಿವರವನ್ನೊಳಗೊಂಡ ಮಾಹಿತಿಯನ್ನು ನಿಗದಿತ ನಮೂನೆಯಲ್ಲಿ ಅಳವಡಿಸಿ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ಪೊಲೀಸ್ ಮಹಾ ನಿರ್ದೇಶಕರು ಇವರುಗಳಿಗೆ ಕಾಲಕಾಲಕ್ಕೆ ಸಲ್ಲಿಸಲು ಸೂಚಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಸುತ್ತೋಲೆಯಲ್ಲಿ ಪ್ರತಿ ಮಾಹೆ ನಡೆಯುವ ಮಾಸಿಕ ಅಪರಾಧ ಸಭೆಯಲ್ಲಿ COTPA–2003ರ ಕಾಯ್ದೆಯನ್ನು ಪರಿಶೀಲಿಸುವಂತೆ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕಾಯ್ದೆಯನ್ನು ಸಹ ಕೂಡಲೇ ಜಾರಿಗೊಳಿಸಿ ಪರಿಶೀಲಿಸುವಂತೆ ಹಾಗೂ COTPA–2003ರ ಅಂಕಿ ಅಂಶಗಳಂತೆಯೇ ಗುಟ್ಕಾ ನಿಷೇಧ ಕಾಯ್ದೆಯಡಿ ದಾಖಲಾದ ಪ್ರಕರಣಗಳ ಅಂಕಿ ಅಂಶಗಳನ್ನೂ ಸಹ ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ರಾಜ್ಯ ಅಪರಾಧ ದಾಖಲಾತಿ ವಿಭಾಗ, ಬೆಂಗಳೂರು ಇವರಿಗೆ ನಿಗದಿತ ನಮೂನೆಯಲ್ಲಿ ಪ್ರತಿ ಮಾಹೆಯೂ ತಪ್ಪದೇ ಕಳುಹಿಸುವಂತೆ ಸೂಚಿಸಲಾಗಿರುತ್ತದೆ.

COTPA–2003ರ ಕಾಯ್ದೆಯಡಿ ಸಂಗ್ರಹಿಸಲಾಗುವ ಅಂಕಿ ಅಂಶಗಳು ಮತ್ತು ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕಾಯ್ದೆಯಡಿ ಸಂಗ್ರಹಿಸಲಾಗುವ ಅಂಕಿ ಅಂಶಗಳ ಮಾಹಿತಿಯನ್ನು ರಾಜ್ಯಾದ್ಯಾಂತ ಸಂಬಂಧಿಸಿದವರಿಂದ ಪಡೆದು ಕ್ರೋಢೀಕೃತ ಮಾಹಿತಿಯನ್ನು ಸಂಗ್ರಹಿಸುವ ಅವಶ್ಯಕತೆ ಇರುತ್ತದೆ ಮತ್ತು ಅದನ್ನು ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. ನಗರಾಭಿವೃದ್ಧಿ ಇಲಾಖೆಗೆ ಸಲ್ಲಿಸಬೇಕಾಗಿರುತ್ತದೆ. ಆದ್ದರಿಂದ ಕ್ರೋಢೀಕೃತ ಜಿಲ್ಲಾವಾರು ಮಾಹಿತಿಯನ್ನು ಸಂಗ್ರಹಿಸಿ ಕಾಲಕಾಲಕ್ಕೆ ಸರ್ಕಾರಕ್ಕೆ ಒದಗಿಸಲು ನೋಡಲ್ ಅಧಿಕಾರಿಯ ಅವಶ್ಯಕತೆ ಇರುತ್ತದೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 36 ಪಿಸಿಬಿ 2013, ಬೆಂಗಳೂರು, ದಿನಾಂಕ: 08–04–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ "ದ ಸಿಗರೇಟ್ ಅಂಡ್ ಅದರ್ ಟೊಬ್ಯಾಕೊ ಪ್ರಾಡಕ್ಟ್ ಆಕ್ಟ್–2003" (COTPA–2003) ಮತ್ತು "ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು–2011"ರಡಿ ದಾಖಲಿಸುವ ಪ್ರಕರಣಗಳು ಮತ್ತು ವಿಧಿಸಲಾಗುವ ದಂಡನೆಯ ಅಂಕಿ ಅಂಶಗಳ ಕ್ರೋಢೀಕೃತ ಮಾಹಿತಿ ಸಂಗ್ರಹಿಸಲು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ಅಪರಾಧಗಳು ಮತ್ತು ತಾಂತ್ರಿಕ ಸೇವೆಗಳು), ನೃಪತುಂಗ ರಸ್ತೆ, ಬೆಂಗಳೂರು ಇವರನ್ನು ನೋಡಲ್ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

ಇವರು COTPA–2003ರಡಿ ಮತ್ತು "ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು–2011"ರಡಿ ದಾಖಲಿಸುವ ಎಲ್ಲಾ ಪ್ರಕರಣಗಳು ಹಾಗೂ ದಂಡನೆಗಳ ವಿವರಗಳನ್ನು ರಾಜ್ಯದ ಎಲ್ಲಾ ಘಟಕಾಧಿಕಾರಿಗಳಿಂದ ಪಡೆದು ಕ್ರೋಢೀಕೃತ ವರದಿಯನ್ನು ಪ್ರತಿ ಮಾಹೆಯ 10ನೇ ತಾರೀಖಿನೊಳಗೆ ಹಿಂದಿನ ತಿಂಗಳ ವಿವರಗಳನ್ನು ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ನಗರಾಭಿವೃದ್ಧಿ ಇಲಾಖೆಗಳಿಗೆ ಕಳುಹಿಸುವಂತೆ ಸೂಚಿಸಲಾಗಿದೆ.

ಈ ಬಗ್ಗೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ತಮ್ಮ ಅಧೀನಾಧಿಕಾರಿಗಳಿಗೆ ಸೂಕ್ತ ಆದೇಶ/ನಿರ್ದೇಶನ ನೀಡುವಂತೆ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ, (ಅಪರಾಧಗಳು).

**P.R. 390**
**SC-200**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಎಸ್. ಪಾರ್ವತಮ್ಮ, ಮಪಿಎಸ್ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ : ಸಿಬ್ಬಂದಿ (4)ಪನ್ನಿ/103/2011 (ಓ.ಬಿ. ಸಂ. 535/2011) ದಿನಾಂಕ : 30–11–2011.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಇವರ ಆದೇಶ ಸಂಖ್ಯೆ : ಅಪೀಲು/45/ಶಿಕ್ಷೆ/2012 (ಓ.ಬಿ. ಸಂಖ್ಯೆ : 97/2012–13) ದಿನಾಂಕ : 12–10–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 23–07–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)33/2013–14, ದಿನಾಂಕ : 11–03–2014.

**ಪ್ರಸ್ತಾವನೆ :**

ಶ್ರೀಮತಿ ಎಸ್. ಪಾರ್ವತಮ್ಮ ಮಪಿಎಸ್ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಹುಳಿಯಾರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ನೀವು ಗೌರವಾನ್ವಿತ ತಾಲ್ಲೂಕು ದಂಡಾಧಿಕಾರಿಯವರ ನ್ಯಾಯಾಲಯದಿಂದ 5 ಬಾರಿ ಬಂದ ನೋಟೀಸ್ ಮತ್ತು ವಾರೆಂಟ್‌ಗಳನ್ನು ಪ್ರಕರಣದ ಪ್ರತಿವಾದಿಗಳಿಗೆ ಜಾರಿ ಮಾಡಿ ಅವರನ್ನು ನ್ಯಾಯಾಲಯಕ್ಕೆ ಹಾಜರು ಪಡಿಸದೇ ವಿಫಲರಾಗಿ ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ತೋರಿರುವುದೂ ಅಲ್ಲದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 30–11–2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 03 (ಮೂರು) ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 12–10–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆಗಳು ಇರದ ಕಾರಣ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 103 ಪೊಸಿಅ 2013, ಬೆಂಗಳೂರು, ದಿನಾಂಕ : 26–04–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಎಸ್. ಪಾರ್ವತಮ್ಮ, ಮಪಿಎಸ್ಐ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

**P.R. 391**

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೋಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾಮೂ. ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ : 09–03–2012.
2. ದಿನಾಂಕ : 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ : 29–03–2014.
4. ಮಹಾಲೇಖಪಾಲರ ಕಛೇರಿ ಪತ್ರ ಸಂ. : Pr.AG(G&SSA)/13-14/CASS-1/A10/145, ದಿನಾಂಕ : 21/22–10–2013.

**ಪ್ರಸ್ತಾವನೆ :**

ದಿನಾಂಕ : 02–03–2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು ಬೆಂಗಳೂರು ಇವರು ಸರ್ಕಾರದ ಪರವಾಗಿ ಮಾರ್ಚ್ ತಿಂಗಳಲ್ಲಿ, ದಿನಾಂಕ : 14–03–2014, 15–03–2014, 18–03–2014, 19–03–2014, 28–03–2014 & 29–03–2014 **06 ಮಹತ್ವದ ದಿನಗಳು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ. 60,000/–** (ರೂಪಾಯಿ ಅರವತ್ತು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖಿತ (4)ರ ಮಹಾಲೇಖಪಾಲರ ಪತ್ರದಲ್ಲಿ ಸರ್ಕಾರಿ ವಕೀಲರಿಗೆ ನೀಡುವ ಸಂಭಾವನೆಯಲ್ಲಿ ಶೇಕಡ 1ರ ಮೊತ್ತವನ್ನು ಟಿ.ಡಿ.ಎಸ್. ಆಗಿ ಕಡಿತಗೊಳಿಸಬೇಕೆಂದು ಸೂಚಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ : 23–04–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1. | Effective hearing (6 days) dated : 14-03-2014, 15-03-2014, 18-03-2014, 19-03-2014, 28-03-2014 & 29-03-2014 @ Rs. 10,000/- per day. | 60,000.00 |
| | **ಒಟ್ಟು ಮೊತ್ತ (ಅರವತ್ತು ಸಾವಿರ ಮಾತ್ರ)** | **60,000.00** |

ಮಹಾಲೇಖಪಾಲರು, ಕರ್ನಾಟಕ ಇವರ ಸೂಚನೆಯ ಶ್ರೀ ಜಿ.ಕೆ. ಬೇಕಲ್‌ರವರಿಗೆ ಸಂಭಾವನೆಯ ಮೊತ್ತದ ರೂ. 60,000/–ಗಳ ಮೊತ್ತಕ್ಕೆ ಶೇಕಡ 1ರಷ್ಟು ಟಿ.ಡಿ.ಎಸ್. ಹಣವನ್ನು ಕಡಿತಗೊಳಿಸಿ ಅಂದರೆ ರೂ. 600/– (ರೂಪಾಯಿ ಆರು ನೂರು ಮಾತ್ರ) ಗಳನ್ನು **"Head of Account-0021 taxes on Income'** ಗೆ ಪಾವತಿಸಲು ತಿಳಿಸಲಾಗಿದೆ. ಬಾಕಿ ಹಣ ರೂ. 59,400/– (ರೂಪಾಯಿ ಐವತ್ತೊಂಬತ್ತು ಸಾವಿರದ ನಾಲ್ಕುನೂರು ಮಾತ್ರ) ಗಳನ್ನು ಮಂಜೂರು ಮಾಡಲಾಗಿದೆ.

1. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "**2070–00–105–0–02–059 ವಿಶೇಷ ತನಿಖಾ ಆಯೋಗಗಳು**" ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

**PR. 392**
**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಪಿಜಿಇಟಿ–2014 ರ ಪ್ರವೇಶಾತಿಗೆ ಸಂಬಂಧಿಸಿದಂತೆ ಹೈದರಾಬಾದ್–ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳು ಸ್ಥಳೀಯ ಅಭ್ಯರ್ಥಿ ಪ್ರಮಾಣಪತ್ರವನ್ನು ಸಲ್ಲಿಸಲು ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ : 15–04–2014 ರಂದು ಪಿಜಿಇಟಿ ಆಯ್ಕೆ ಸಮಿತಿ ಅಧ್ಯಕ್ಷರು ಹಾಗೂ ಇನ್ನಿತರೆ 07 ಮಂದಿ ಸದಸ್ಯರ ಸಮ್ಮುಖದಲ್ಲಿ ನಡೆದ ಸಭಾ ನಡವಳಿಗಳು

**ಪ್ರಸ್ತಾವನೆ :**

ಮೇಲೆ ಓದಲಾದ ನಡವಳಿಗಳನ್ವಯ The Karnataka Education Institutions (Regulations of admission in the Hyderabad-Karnataka region) order, 2013 ಹಾಗೂ The Karnataka Private Unaided Educational Institutions (Regulations of admission in the Hyderabad-Karnataka region) order, 2013 ರನ್ವಯ ಸಂವಿಧಾನದ ಅನುಚ್ಛೇದ 371(ಜೆ)ರಡಿ ಹೈದರಾಬಾದ್–ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗೆ

ಮೀಸಲಾತಿಯನ್ನು ನಿಗದಿಪಡಿಸಲಾಗಿದ್ದು, ಅದರಂತೆ ಕೆಲವು ಅಭ್ಯರ್ಥಿಗಳು ಸಕ್ಷಮ ಪ್ರಾಧಿಕಾರದಿಂದ ಪ್ರಮಾಣಪತ್ರವನ್ನು ಪಡೆದು ದಾಖಲಾತಿ ಪರಿಶೀಲನೆಯ ಸಮಯದಲ್ಲಿ ಸಲ್ಲಿಸಿದ್ದು, ಬಹುತೇಕ ವಿದ್ಯಾರ್ಥಿಗಳು ಜಾಗೃತಿ ಕೊರತೆಯಿಂದಾಗಿ ಪ್ರಮಾಣಪತ್ರಗಳನ್ನು ಸಲ್ಲಿಸಿರುವುದಿಲ್ಲವೆಂದು ಅಭಿಪ್ರಾಯ ವ್ಯಕ್ತವಾಗಿರುತ್ತದೆ.

ಮುಂದುವರಿದು, 371ಜೆ ಹೊಸ ನಿಯಮವಾಗಿದ್ದು, ಈ ನಿಯಮದ ಬಗ್ಗೆ ಸಾರ್ವಜನಿಕರಲ್ಲಿ ವ್ಯಾಪಕ ಪ್ರಚಾರ ದೊರೆತಿರುವುದಿಲ್ಲವಾದ್ದರಿಂದ ಬಹಳಷ್ಟು ಅಭ್ಯರ್ಥಿಗಳು ಪ್ರಮಾಣ ಪತ್ರವನ್ನು ಪಡೆದಿರುವುದಿಲ್ಲ. ಅಲ್ಲದೇ ಪ್ರಮಾಣಪತ್ರವನ್ನು ಜಾರಿ ಮಾಡುವ ಪ್ರಾಧಿಕಾರವಾದ ಕಂದಾಯ ಇಲಾಖೆಯು ಚುನಾವಣಾ ಕಾರ್ಯದಲ್ಲಿ ಕಾರ್ಯನಿರತವಾಗಿದ್ದರಿಂದ ಸಕ್ಷಮ ಪ್ರಾಧಿಕಾರದಿಂದ ಪ್ರಮಾಣಪತ್ರವನ್ನು ಪಡೆಯುವುದು ಸಹ ಕಷ್ಟವಾಗಿರುತ್ತದೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಮಾಣ ಪತ್ರವನ್ನು ಸಲ್ಲಿಸದ ಅಭ್ಯರ್ಥಿಗಳಿಗೆ ಮತ್ತೊಂದು ಅವಕಾಶವನ್ನು ನೀಡದಿದ್ದ ಪಕ್ಷದಲ್ಲಿ ಬಹಳಷ್ಟು ಅಭ್ಯರ್ಥಿಗಳು ಕಾನೂನಿನ ಪ್ರಕಾರ ಪಡೆಯಬೇಕಾದ 371(ಜೆ)ರಡಿ ಮೀಸಲಾತಿ ಪಡೆಯಲು ಸಾಧ್ಯವಾಗದೇ ಸಮಸ್ಯೆಯುಂಟಾಗುವುದರಿಂದ ಈ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಅನುಮೋದನೆ ಪಡೆಯುವಂತೆ ಪಿಜಿಇಟಿ ಆಯ್ಕೆ ಸಮಿತಿಯ ಅಧ್ಯಕ್ಷರು ಸಲಹೆ ನೀಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಪಿಜಿಇಟಿ–2014ರ ಪ್ರವೇಶಾತಿಯಲ್ಲಿ ಸಂವಿಧಾನದ ಅನುಚ್ಛೇದ 371(ಜೆ) ರಡಿ ಹೈದರಾಬಾದ್–ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗಾಗಿ ನಿಗದಿಪಡಿಸಲಾಗಿರುವ ಮೀಸಲಾತಿಯನ್ನು ಪಡೆಯುವ ಸಲುವಾಗಿ ಪ್ರಮಾಣಪತ್ರಗಳನ್ನು ಸಲ್ಲಿಸುವ ಅವಧಿಯನ್ನು ಮೇ 03, 2014 ರವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 139 ಆರ್‌ಜಿಯು 2014, ಬೆಂಗಳೂರು, ದಿನಾಂಕ : 21–04–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪಿಜಿಇಟಿ–2014 ರ ಪ್ರವೇಶಾತಿಯಲ್ಲಿ ಸಂವಿಧಾನದ ಅನುಚ್ಛೇದ 371(ಜೆ)ರಡಿ ಹೈದರಾಬಾದ್–ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗಾಗಿ ನಿಗದಿಪಡಿಸಲಾಗಿರುವ ಮೀಸಲಾತಿಯನ್ನು ಪಡೆಯುವ ಸಲುವಾಗಿ ಸ್ಥಳೀಯ ಅಭ್ಯರ್ಥಿ ಪ್ರಮಾಣಪತ್ರಗಳನ್ನು ಸಲ್ಲಿಸುವ ಅವಧಿಯನ್ನು ಮೇ 03, 2014 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**PR. 393**

## ಇಂಧನ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ : ಇಎನ್ 30 ವಿಎಸ್‌ಸಿ 2014, ಬೆಂಗಳೂರು, ದಿನಾಂಕ : 22–03–2014.**

ಸರ್ಕಾರದ ಆದೇಶ ಸಂಖ್ಯೆ : ಇಎನ್ 40 ಪಿಎಸ್‌ಆರ್ 2013 (ಭಾಗ–1) ದಿನಾಂಕ : 30–10–2013ಕ್ಕೆ ಹೊಂದಿಕೊಂಡಿರುವ ಅನುಬಂಧ–1ರ ಕಂಡಿಕೆ 1.4.2 ರ ಪ್ರತಿ ಪಂಪ್‌ಸೆಟ್‌ಗೆ ಆಗುವ ವೆಚ್ಚ ಮತ್ತು ಇಂಧನ ಉಳಿತಾಯದ ವಿವರದ ಅಡಿಯಲ್ಲಿ ನಮೂದಿಸಿರುವ ಪಟ್ಟಿಯ ಎರಡನೇ ಸಾಲಿನಲ್ಲಿ

"MNRE ಪ್ರಕಾರ ಪ್ರತಿ ಸ್ಥಾವರಕ್ಕೆ ತಗಲುವ ಅಂದಾಜು ವೆಚ್ಚ (ಬ್ಯಾಟರಿಯನ್ನೊಳಗೊಂಡು) ರೂ.ಗಳಲ್ಲಿ"

ಎಂಬುದರ ಬದಲಾಗಿ

"MNRE ಪ್ರಕಾರ ಪ್ರತಿ ಸ್ಥಾವರಕ್ಕೆ ತಗಲುವ ಅಂದಾಜು ವೆಚ್ಚ (ಬ್ಯಾಟರಿ ರಹಿತ) ರೂ.ಗಳಲ್ಲಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಆದೇಶ ಮತ್ತು ಅನುಬಂಧದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**PR. 394**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ENERGY SECRETARIAT

**Sub :** Issue of directions under Section 11 of Electricity Act 2003 to the Generators in the State for Supply of energy to the State subject to determination of final tariff by Hon'ble Karnataka Electricity Regulatory Commission (KERC).

**PREAMBLE :**

1. The State is facing power shortage. There is a deficit between demand and supply in the State. Owing to steep increase over the years in the demand for power supply, the daily consumption of energy has also increased.
2. The electricity demand of the Karnataka State is met by Karnataka Power Corporation Limited(KPCL)'s hydel and thermal generation sources, CGS allocation, NCE sources, short term and medium term purchases through Competitive Bid Route. The State demand reaches its maximum during the month of January to May due to schools and colleges examinations and hot summer.
3. The status of availability from various sources and impediments faced currently in maintaining the availability are as follows: i)

a) State daily Average power consumption is 189.14MU in February-14 and 178.62 MU in March-14 (up to $19^{th}$).

b) The Maximum energy recorded is 195.11MU in February-14 (14.03.2014) and 192.66MU in March-2014 (upto $19^{th}$) (19.03.2014). The Minimum energy recorded in February-2014 is 175.74MU (02.02.2014) and in March-2014 (up to $19^{th}$) is 151.66 MU. ($09^{th}$ Mar).

